ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1063 |
| ಸದಸ್ಯರ ಹೆಸರು | : | ಶ್ರೀ ಪಿ.ಆರ್. ರಮೇಶ್ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 22-12-2021. |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ನಗರದ ಹೊರವಲಯದಲ್ಲಿ ಹಾದು ಹೋಗುವ ರಾಷ್ಟ್ರೀಯ ಹೆದ್ದಾರಿಯು ಕಳಪೆಯಾಗಿರುವುದರಿಂದ ಕುರಿತು ಸರ್ಕಾರಕ್ಕೆ ಒಟ್ಟು ಎಷ್ಟು ದೂರುಗಳು ಸಲ್ಲಿಕೆಯಾಗಿವೆ; (ವಿವರ ನೀಡುವುದು) | ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ಇವರ ವ್ಯಾಪ್ತಿಯಲ್ಲಿ ಬರುವ ಸದರಿ ರಸ್ತೆಯ ದೂರುಗಳನ್ನು ಓಉಂಖ-1033 ಸಹಾಯವಾಣಿಯಲ್ಲಿ MoRT&H ಸಾರ್ವಜನಿಕ ಕುಂದು ಕೊರತೆ Portal ನಲ್ಲಿ ಲಿಖಿತ ಮತ್ತು ದೂರವಾಣಿ ಮೂಲಕ ಪ್ರಸಕ್ತ ಸಾಲಿನ 2020-21ನೇ ದಿನಾಂಕ:17.12.2021 ರವರೆಗೆ ಸುಮಾರು 32 ದೂರುಗಳು ಸ್ವೀಕೃತವಾಗಿರುತ್ತವೆ. ಈ ದೂರುಗಳಿಗೆ ಕಾಲಕಾಲಕ್ಕೆ ಉತ್ತರಿಸಲಾಗಿರುತ್ತದೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ರವರು ವರದಿಸಿರುತ್ತಾರೆ. |
| ಆ) | ತುಮಕೂರು ನಗರದಿಂದ ಚಿತ್ರದುರ್ಗದ ಮಾರ್ಗ ಮತ್ತು ತುಮಕೂರು ನಗರದಿಂದ, ಬೆಂಗಳೂರು ಮಾರ್ಗದ ರಾಷ್ಟ್ರೀಯ ಹೆದ್ದಾರಿಯಲ್ಲಿ ಯಾವ ವರ್ಷದಲ್ಲಿ ಡಾಂಬರೀಕರಣ ಮಾಡಲಾಗಿದೆ; ಯಾವುವು; (ವಿವರ ನೀಡುವುದು) ಸದರಿ ರಸ್ತೆಯಲ್ಲಿ ಡಾಂಬರೀಕರಣ ಕೈಗೊಂಡ ಸಂಸ್ಥೆ / ಗುತ್ತಿದಾರರ ವಿವರ ಜೊತೆಗೆ ಕಾಮಗಾರಿಯ ವಿವರ ನೀಡುವುದು); | ತುಮಕೂರು ನಗರದಿಂದ ಚಿತ್ರದುರ್ಗದ ಮಾರ್ಗ ಮತ್ತು ತುಮಕೂರು ನಗರದಿಂದ ಬೆಂಗಳೂರು ಮಾರ್ಗದಲ್ಲಿ ರಾಷ್ಟ್ರೀಯ ಹೆದ್ದಾರಿ NH-4 ಹಾದುಹೋಗುತ್ತಿದ್ದು, ಸದರಿ ರಸ್ತೆಯಲ್ಲಿ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ವತಿಯಿಂದ ಕೈಗೊಂಡ ಡಾಂಬರೀಕರಣ ವಿವರಗಳನ್ನು ಈ ಕೆಳಕಂಡಂತೆ ವರದಿಸಿರುತ್ತಾರೆ. |

| ಕ್ರ. ಸಂ. | ಯೋಜನೆಯ ಹೆಸರು | ಉದ್ದ ಕಿ.ಮೀ. | ರಿಯಾಯಿತಿ ದಾರರ ಹೆಸರು | ಯಾವ ವರ್ಷದಲ್ಲಿ ಡಾಂಬರೀ ಕರಣವನ್ನು ಕೈಗೊಳ್ಳ ಲಾಯಿತು. | ಟಿಪ್ಪಣಿ |
|---|---|---|---|---|---|
| 1. | ಬೆಂಗಳೂರ- ನೆಲಮಂಗಲ ವಿಭಾಗ- NH-4 | 19.50 | M/s. NBTPL | 2018 | ಡಾಂಬರೀಕರಣ ನವೀಕರಣ ಕಾಮಗಾರಿಯನ್ನು ಜನವರಿ-2018 ರ ವೇಳೆಗೆ M/s. ನವಯುಗ ಬೆಂಗಳೂರು ಟೋಲ್ ಪ್ರೈ.ಲಿ., ಸಂಸ್ಥೆಯವರು ಪೂರ್ಣಗೊಳಿಸಿರುತ್ತಾರೆ. ಹಾಗೂ ರಸ್ತೆಯು ಉತ್ತಮ ಸ್ಥಿತಿಯಲ್ಲಿರುತ್ತದೆ. |
| 2. | ನೆಲಮಂಗಲ ದಿಂದ ತುಮಕೂರು 4 ಪಥದ ರಸ್ತೆ | 32.50 | M/s. JAS Toll Private Ltd., | 2019 | ಡಾಂಬರೀಕರಣ ನವೀಕರಣ ಕಾಮಗಾರಿಯು ಜನವರಿ-2019ರ ವೇಳೆಗೆ M/s. JAS Toll Pvt. Ltd., ಮೂಲಕ ಪೂರ್ಣ ಗೊಳಿಸಿರುತ್ತಾರೆ ಹಾಗೂ ರಸ್ತೆಯು ಉತ್ತಮ ಸ್ಥಿತಿಯಲ್ಲಿರುತ್ತದೆ. |
| 3. | ತುಮಕೂರು – ಚಿತ್ರದುರ್ಗ 4 ಪಥ ರಸ್ತೆ (ತುಮಕೂರು – ಚಿತ್ರದುರ್ಗ ಬೈಪಾಸ್ ಹೊರತು ಪಡಿಸಿ) | 114.00 | M/s. IRB Private Ltd., | 2011-14 | ಯೋಜನೆಯನ್ನು 2011-14ರಲ್ಲಿ IRB Private Ltd., ನಿರ್ಮಿಸಲಾಗಿದ್ದು, ನಂತರ ಯಾವುದೇ ನವೀಕರಣ ಕಾರ್ಯವನ್ನು ಕೈಗೊಂಡಿರುವುದಿಲ್ಲ. |

| | | |
|---|---|---|
| ಇ) | ಸದರಿ ರಾಷ್ಟ್ರೀಯ ಹೆದ್ದಾರಿ ರಸ್ತೆಯಲ್ಲಿ ರಸ್ತೆ ಸುಂಕ ವಸೂಲಾತಿ ಕೇಂದ್ರಗಳು (Toll Collection Booth) ಟೋಲ್ ವಸೂಲಿ ಮಾಡಿದರೂ ಸಹಾ ರಸ್ತೆಯ ಸ್ಥಿತಿಗತಿಗಳು ಬದಲಾಗದಿರುವುದು ಸರ್ಕಾರ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು? (ವಿವರ ನೀಡುವುದು) | 1. ಬೆಂಗಳೂರು – ನೆಲಮಂಗಲ ವಿಭಾಗಕ್ಕೆ ಸಂಬಂಧಿಸಿದಂತೆ ಕಿ.ಮೀ. 10+00 ರಿಂದ ಕಿ.ಮೀ.29.500 ರವರೆಗಿನ ರಸ್ತೆಯು ಉತ್ತಮವಾಗಿರುತ್ತದೆ. ಅದರಂತೆ ಟೋಲ್ ಏಜೆನ್ಸಿ ರಸ್ತೆ ಬಳಕೆದಾರರಿಂದ ಟೋಲ್ ಸಂಗ್ರಹಿಸುತ್ತಿದೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರರವರು ವರದಿಸಿರುತ್ತಾರೆ.<br>2. ನೆಲಮಂಗಲ – ತುಮಕೂರು ಮತ್ತು ತುಮಕೂರು – ಚಿತ್ರದುರ್ಗಕ್ಕೆ ಸಂಬಂಧಿಸಿದಂತೆ ಅನಿರೀಕ್ಷಿತ ಮಳೆಯಿಂದಾಗಿ ರಸ್ತೆ ಹಾಳಾಗಿರುತ್ತದೆ. ರಸ್ತೆಯಲ್ಲಿ ನಿರ್ವಹಣೆ ಸಂಬಂಧಿತ ಕಾಮಗಾರಿಗಳು ಪ್ರಗತಿಯಲ್ಲಿದ್ದು, ಶೀಘ್ರದಲ್ಲಿ ಈ ರಸ್ತೆಯನ್ನು ಸರಿಪಡಿಸಲಾಗುವುದೆಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರರವರು ವರದಿಸಿರುತ್ತಾರೆ. |

ಕಡತ ಸಂಖ್ಯೆ: ಲೋಇ 351 ಸಿಎನ್‌ಹೆಚ್ 2021 (ಇ)

(ಸಿ.ಸಿ.ಪಾಟೀಲ)
ಲೋಕೋಪಯೋಗಿ ಸಚಿವರು